

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 159(192) |
| ಸದಸ್ಯರ ಹೆಸರು | : | ಶ್ರೀ ಎಸ್ ನಾಗರಾಜ (ಸಂದೇಶ್ ನಾಗರಾಜ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರದಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 08-12-2020 |
| ಉತ್ತರಿಸುವವರು | : | ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು. |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ನಂಜನಗೂಡು ಬಜಾರ್ ರಸ್ತೆಯಲ್ಲಿ ನೂತನವಾಗಿ ನಿರ್ಮಿಸಿರುವ ತರಕಾರಿ, ದಿನಸಿ, ಮಾಂಸ ಹಾಗೂ ಮೀನು ಮರುಕಟ್ಟೆಯಲ್ಲಿ ನಿರ್ಮಿಸಿರುವ ಮಳಿಗೆಗಳ ಸಂಖ್ಯೆ: ಎಷ್ಟು; ಮಾರುಕಟ್ಟೆ ಕಾಮಗಾರಿಯು ಅವೈಜ್ಞಾನಿಕವಾಗಿದ್ದು, ಕಳಪೆ ಗುಣಮಟ್ಟದಿಂದ ಕೂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ನಂಜನಗೂಡು ಬಜಾರ್ ರಸ್ತೆಯಲ್ಲಿ ನೂತನವಾಗಿ ನಿರ್ಮಿಸುತ್ತಿರುವ ತರಕಾರಿ, ದಿನಸಿ, ಮಾಂಸ ಹಾಗೂ ಮೀನು ಮಾರುಕಟ್ಟೆಯಲ್ಲಿ ನಿರ್ಮಿಸಿರುವ ಮಳಿಗೆಗಳ ಸಂಖ್ಯೆ:-08, ತೆರೆದ ಮಾಂಸದ ಅಂಗಡಿಗಳ ಸಂಖ್ಯೆ:18 ತೆರೆದ ಹಣ್ಣು ಮತ್ತು ತರಕಾರಿ ಅಂಗಡಿಗಳ ಸಂಖ್ಯೆ:39. ಸದರಿ ಮಾರುಕಟ್ಟೆ ಸಂಕೀರ್ಣಕ್ಕೆ ವೈಜ್ಞಾನಿಕವಾಗಿ ನಕ್ಷೆಯನ್ನು ತಯಾರಿಸಿ, ಮಣ್ಣು ಪರೀಕ್ಷೆಯನ್ನು ಮಾಡಿಸಿ, ರಚನಾತ್ಮಕ ವಿನ್ಯಾಸಗಾರರಿಂದ ಸೂಕ್ತ ವಿನ್ಯಾಸ ತಯಾರಿಸಿ ಅದರಂತೆ ಕಟ್ಟಡವನ್ನು ನಿರ್ಮಿಸುತ್ತಿದ್ದು, ಪ್ರತೀ ಹಂತದಲ್ಲೂ ಸಕ್ಷಮ ಪ್ರಾಧಿಕಾರದಿಂದ ಹಾಗೂ ಮೂರನೇ ವ್ಯಕ್ತಿ/ಸಂಸ್ಥೆಯಿಂದ ಗುಣಮಟ್ಟ ತಪಾಸಣೆ ಮಾಡಿಸಿ ವರದಿಯನ್ನು ಪಡೆದಿದ್ದು, ಸದರಿ ಮಾರುಕಟ್ಟೆ ಕಾಮಗಾರಿಯು ಉತ್ತಮ ಗುಣಮಟ್ಟದಿಂದ ಕೂಡಿರುವುದಾಗಿ ವರದಿ ಬಂದಿರುತ್ತದೆ. |
| (ಆ) | ನೆಲ ಅಂತಸ್ತಿನಲ್ಲಿ ನೀರು ಹರಿದು ಹೋಗಲು ಅವಕಾಶ ಇಲ್ಲದೇ ನೀರು ನಿಲ್ಲುವುದು, ಗ್ರಾಹಕರ ಓಡಾಟಕ್ಕೆ ಸೂಕ್ತ ಸ್ಥಳವಾಕಾಶ ಬಿಡದಿರುವುದು, ಗೋಡೆಗಳು ಬಿರುಕು ಬಿಟ್ಟಿರುವುದು, ಕೇವಲ ಎರಡು ಪ್ರವೇಶ ದ್ವಾರಗಳ ನಿರ್ಮಾಣ ಮುಂತಾದ ಅವ್ಯವಸ್ಥೆಗಳು ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ನೂತನವಾಗಿ ನಿರ್ಮಿತವಾಗಿರುವ ಈ ಮಾರುಕಟ್ಟೆಯನ್ನು ನವೀಕರಣಗೊಳಿಸಿ ವ್ಯಾಪಾರಸ್ಥರಿಗೆ ಹಂಚಿಕೆ ಮಾಡಲು ಕ್ರಮ ಕೈಗೊಳ್ಳಲಾಗುವುದೇ? | ಮಾರುಕಟ್ಟೆ ಕಟ್ಟಡ ಕಾಮಗಾರಿಯು ಪ್ರಗತಿಯಲ್ಲಿದ್ದು, ನೆಲ ಅಂತಸ್ತಿನಲ್ಲಿ ಮಳೆ ನೀರು ನಿಲ್ಲದಿರುವ ಹಾಗೆ ಚರಂಡಿ ವ್ಯವಸ್ಥೆಯನ್ನು ಕಲ್ಪಿಸಲಾಗುವುದು, ಗ್ರಾಹಕರ ಓಡಾಟಕ್ಕೆ ಮಂಜೂರಾತಿ ನಕ್ಷೆಯಂತೆ ಸೂಕ್ತ ಸ್ಥಳಾವಕಾಶವನ್ನು ನೀಡಲಾಗಿರುತ್ತದೆ. ಯಾವುದೇ ಬಿರುಕುಗಳು ಮೂಡದಿರುವ ಹಾಗೆ ಉತ್ತಮ ಗುಣಮಟ್ಟದಲ್ಲಿ ಕಾಮಗಾರಿಯನ್ನು ನಿರ್ವಹಿಸಿ ಪೂರ್ಣಗೊಳಿಸಲು ಕ್ರಮವಹಿಸಲಾಗಿರುತ್ತದೆ. ತರಕಾರಿ ಮಾರುಕಟ್ಟೆಗೆ ಪ್ರತ್ಯೇಕ ಪ್ರವೇಶ ದ್ವಾರ, ಮೀನು ಹಾಗೂ ಮಾಂಸ ಮಾರುಕಟ್ಟೆಗೆ ಪ್ರತ್ಯೇಕ ಪ್ರವೇಶ ದ್ವಾರ ಮತ್ತು ವಾಹನ ನಿಲುಗಡೆ ನಿಲ್ದಾಣಕ್ಕೆ ಪ್ರತ್ಯೇಕ ಪ್ರವೇಶ ದ್ವಾರಗಳನ್ನು ಕಲ್ಪಿಸಲಾಗಿರುತ್ತದೆ. ಮಾರುಕಟ್ಟೆ ಕಟ್ಟಡ ಕಾಮಗಾರಿಯ ಅಂತಿಮ ಹಂತದ ಕೆಲಸಗಳು ಪ್ರಗತಿಯಲ್ಲಿದ್ದು, ಕಟ್ಟಡದ ಕಾಮಗಾರಿಯಲ್ಲಿ ಯಾವುದೇ ಲೋಪ ದೋಷವಾಗದಂತೆ ಎಚ್ಚರಿಕೆವಹಿಸಿ ಒಳ್ಳೆಯ ಗುಣಮಟ್ಟವನ್ನು ಕಾಪಾಡಿಕೊಂಡು ಶೀಘ್ರವಾಗಿ ಪೂರ್ಣಗೊಳಿಸಿ, ನಿಯಮಾನುಸಾರ ವ್ಯಾಪಾರಸ್ಥರಿಗೆ ಹಂಚಿಕೆ ಮಾಡಲು ಕ್ರಮವಹಿಸಲಾಗುವುದು. |

ಸಂಖ್ಯೆ: ನಅಇ 136 ಜಿಇಎಲ್ 2020(ಇ)

(ಡಾ|| ನಾರಾಯಣ ಗೌಡ)
ಪೌರಾಡಳಿತ, ತೋಟಗಾರಿಕೆ ಹಾಗೂ ರೇಷ್ಮೆ ಸಚಿವರು